# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಡಿಸೆಂಬರ್ ೨೯, ೨೦೧೬ (ಪುಷ್ಯ ೮, ಶಕ ವರ್ಷ ೧೯೩೮)<br>Bengaluru, Thursday, December 29, 2016 (Pushya 8, Shaka Varsha 1938) | ಸಂಚಿಕೆ ೫೧<br>Issue 51 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ:** ನೀರಾ ನೀತಿ ಹಾಗೂ ನೀರಾವನ್ನು ಮಿತ ಪ್ರಮಾಣದಲ್ಲಿ ಕಟಾವು ಮಾಡಲು ತೆಂಗು ಬೆಳೆಗಾರರ ಫೆಡರೇಷನ್‌ನ ಸದಸ್ಯರಿಗೆ ಅನುಮತಿಸಲು ಅಬಕಾರಿ ಕಾಯ್ದೆಗೆ ತಿದ್ದುಪಡಿ ತರುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ತೋಟಗಾರಿಕೆ ಇಲಾಖೆ ಇವರ ಪತ್ರ ಸಂಖ್ಯೆ: ತೋಇ/ತೋಜಂನಿ:ತೋಬೆ:ಸತೋಅ–2/12/2015–16/1656, ದಿನಾಂಕ:03–11–2015.

**ಪ್ರಸ್ತಾವನೆ:**

2015–16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಈ ಕೆಳಕಂಡಂತೆ ಘೋಷಿಸಲಾಗಿದೆ:

"ತೆಂಗು ಉತ್ಪಾದಕರ ಸಂಘಗಳ ಸದಸ್ಯರು ಅವರ ತೆಂಗಿನ ಮರಗಳಿಂದ ಕೆಲ ಪ್ರಮಾಣದಲ್ಲಿ ನೀರಾ ಇಳಿಸಲು ಅನುಮತಿ ನೀಡುವುದಕ್ಕಾಗಿ ಅಬಕಾರಿ ಅಧಿನಿಯಮಕ್ಕೆ ತಿದ್ದುಪಡಿ ತರಲಾಗುವುದು. ಇದು ತೆಂಗು ಬೆಳೆಗಾರರ ಆದಾಯವನ್ನು ಗಣನೀಯವಾಗಿ ಹೆಚ್ಚಿಸುವಲ್ಲಿ ಸಹಾಯಕವಾಗುವುದು."

ಮೇಲೆ ಓದಲಾದ ದಿನಾಂಕ:03–11–2015ರ ಪತ್ರದಲ್ಲಿ ರಾಜ್ಯದಲ್ಲಿ ನೀರಾ ನೀತಿಯನ್ನು ಜಾರಿಗೆ ತರುವ ಬಗ್ಗೆ ಪ್ರಸ್ತಾವನೆಯನ್ನು ನಿರ್ದೇಶಕರು, ತೋಟಗಾರಿಕೆ ಇಲಾಖೆ ಇವರು ಸಲ್ಲಿಸಿರುತ್ತಾರೆ. ತೆಂಗಿನ ಬೆಳೆಯು ಕರ್ನಾಟಕ ರಾಜ್ಯದ ಪ್ರಮುಖ ವಾಣಿಜ್ಯ ತೋಟದ ಬೆಳೆಗಳಲ್ಲಿ ಒಂದಾಗಿದೆ. ತೆಂಗಿನ ಬೆಳೆಯನ್ನು ರಾಜ್ಯದಲ್ಲಿ 4.97 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದ್ದು, ಸರಾಸರಿ ವಾರ್ಷಿಕ ಉತ್ಪಾದನೆಯು 48,000 ಲಕ್ಷ ಕಾಯಿಗಳಿಗಿಂತಲೂ ಮಿಗಿಲಾಗಿದೆ. ಈ ಬೆಳೆಯು ಒಟ್ಟಾರೆ ತೋಟಗಾರಿಕೆ ವಿಸ್ತೀರ್ಣದ 27% ಪ್ರದೇಶವನ್ನು ಆವರಿಸಿದೆ. ಕರ್ನಾಟಕ ರಾಜ್ಯವು ತೆಂಗು ಬೆಳೆಯ ಒಟ್ಟು ವಿಸ್ತೀರ್ಣದಲ್ಲಿ ಎರಡನೇ ಸ್ಥಾನದಲ್ಲಿ ಮತ್ತು ಉತ್ಪಾದನೆಯಲ್ಲಿ ಮೂರನೇ ಸ್ಥಾನದಲ್ಲಿರುತ್ತದೆ. ಕರ್ನಾಟಕದಲ್ಲಿ ಉತ್ಪಾದನೆಯ ಸುಮಾರು 40% ಭಾಗವನ್ನು ಅಡಿಗೆಗೆ ಮತ್ತು ಧಾರ್ಮಿಕ ಉದ್ದೇಶಗಳಿಗೆ 20% ಕೈಗಾರಿಕಾ ಉದ್ದೇಶಗಳಿಗೆ ಬಳಸಲಾಗುತ್ತಿದೆ.

ರಾಜ್ಯದಲ್ಲಿ ತೆಂಗಿನ ಬೇಸಾಯವನ್ನು ಬಹುಪಾಲು ಸಣ್ಣ ಮತ್ತು ಅತಿಸಣ್ಣ ಹಿಡುವಳಿಗಳಲ್ಲಿ ಕೈಗೊಳ್ಳುತ್ತಿರುವುದರಿಂದ ಈ ಬೆಳೆಯು ಆರ್ಥಿಕವಾಗಿ ಪ್ರಾಮುಖ್ಯತೆಯನ್ನು ಪಡೆದಿದೆ. ತೆಂಗಿನ ಬೆಳೆಗಾರರು ಬೆಲೆಯಲ್ಲಿನ ಏರಿಳಿತ, ರೋಗ ಮತ್ತು ಕೀಟಗಳ ತೀವ್ರತೆ, ಉತ್ಪಾದನಾ ಪರಿಕರಗಳ ಬೆಲೆಯಲ್ಲಿ ಹೆಚ್ಚಳ ಇತ್ಯಾದಿ ವಿವಿಧ ಕಾರಣಗಳಿಗಾಗಿ ಸಂಕಷ್ಟ ಸ್ಥಿತಿಯಲ್ಲಿರುತ್ತಾರೆ. ಹೆಚ್ಚಿದ ಉತ್ಪಾದನಾ ವೆಚ್ಚ ಮತ್ತು ಕುಂಠಿತಗೊಂಡ ಉತ್ಪಾದನೆಯಿಂದಾಗಿ ರೈತರ ಆದಾಯವು ಕ್ಷೀಣಗೊಂಡಿರುತ್ತದೆ.

ರಾಜ್ಯದಲ್ಲಿ ತೆಂಗಿನ ಬೇಸಾಯವನ್ನು ಮೈದಾನ ಪ್ರದೇಶದಲ್ಲಿ ಕೈಗೊಂಡಿದ್ದು, ಮಳೆಯಾಶ್ರಿತವಾಗಿದೆ. ಆದುದರಿಂದ ಈ ತೆಂಗಿನ ತೋಟಗಳು ಹವಾಮಾನ ವೈಪರೀತ್ಯಕ್ಕೆ ಒಳಗಾಗಿದ್ದು ಮತ್ತು ನಿರ್ವಹಣಾ ನಿರ್ಲಕ್ಷತೆಯಿಂದ ನಷ್ಟದಾಯಕ ಕೃಷಿಯಾಗಿ ಪರಿಣಮಿಸಿವೆ. ಈ ಹಿನ್ನೆಲೆಯಲ್ಲಿ ತೆಂಗಿನ ಬೇಸಾಯವನ್ನು ಪುನಃಶ್ಚೇತನಗೊಳಿಸುವ ಅವಶ್ಯಕತೆ ಉಂಟಾಗಿದೆ. ಈ ಹಿಂದಿನ ವೈಭವವನ್ನು ಪುನಃ ಸ್ಥಾಪಿಸಬೇಕಾದರೆ ತೆಂಗು ಬೆಳೆ ಆರ್ಥಿಕತೆಯನ್ನು ಕೊಬ್ಬರಿ – ತೆಂಗಿನ ಎಣ್ಣೆಗಳ ಮೇಲಿನ ಅವಲಂಬನೆಯಿಂದ ಮುಕ್ತಗೊಳಿಸುವುದು ಹಾಗೂ ತೆಂಗಿನ ಇತರೆ ಮೌಲ್ಯವರ್ಧಿತ ಉತ್ಪನ್ನಗಳ ಅಭಿವೃದ್ಧಿ ಹಾಗೂ ಪ್ರಚಾರ ಮಾಡುವುದು ಸಮಂಜಸವಾದ ಕಾರ್ಯನೀತಿಯಾಗಿರುತ್ತದೆ.

ಮೌಲ್ಯವರ್ಧನೆ, ಉತ್ಪನ್ನಗಳ ವೈವಿಧ್ಯತೆ, ಕ್ಷೇತ್ರಮಟ್ಟದಲ್ಲಿ ಸಂಸ್ಕರಣೆ ಅಭಿವೃದ್ಧಿ ಮತ್ತು ಉಪ ಉತ್ಪನ್ನದ ಬಳಕೆಯ ಹೆಚ್ಚಳದಿಂದ ತೆಂಗಿನ ಉದ್ಯಮದ ಸುಸ್ಥಿರತೆಯನ್ನು ಸಾಧಿಸಲು ಅವಕಾಶವಿರುತ್ತದೆ. ಈ ದಿಶೆಯಲ್ಲಿ ನೀರಾ ಒಂದು ಮೌಲ್ಯವರ್ಧಿತ ಉತ್ಪನ್ನವಾಗಿ ತೆಂಗಿನ ಬೆಳೆಗಾರರ ಭವಿಷ್ಯದ ಪುನಃಶ್ಚೇತನ ಸಾಮರ್ಥ್ಯವನ್ನು ಹೊಂದಿದೆ.

ತೆಂಗಿನ ನೀರಾ ಉತ್ಪಾದನೆ, ಸಂಸ್ಕರಣೆ ಮತ್ತು ಮಾರುಕಟ್ಟೆ ಕುರಿತಂತೆ ನೀತಿಯನ್ನು ಜಾರಿಗೊಳಿಸಬೇಕಾದ ಅವಶ್ಯಕತೆ ಇರುತ್ತದೆ. ಇದರಿಂದ ಬಹುಪಾಲು ಮಳೆಯಾಶ್ರಿತವಾದ ತೆಂಗು ಬೆಳೆಯುವ ಪ್ರದೇಶಗಳ ತೆಂಗಿನ ಬೆಳೆಗಾರರಿಗೆ ಸುಸ್ಥಿರ ಆದಾಯವನ್ನು ಒದಗಿಸಲು ಸಹಕಾರಿಯಾಗಲಿದೆ.

ಪ್ರಸ್ತುತ ನೀರಾ ಇಳಿಸುವುದು ಮತ್ತು ಮಾರಾಟದಲ್ಲಿ ಇರುವ ಸಂದಿಗ್ಧತೆಯಿಂದಾಗಿ ರೈತರು ತೊಂದರೆಗೊಳಗಾಗಿದ್ದು, ವ್ಯವಸ್ಥಿತ ನಿಯಮಗಳನ್ನು ತರುವ ಮೂಲಕ ತೆಂಗಿನ ಮರಗಳಿಂದ ನೀರಾ ಇಳಿಸುವ ಪ್ರಕ್ರಿಯೆಯನ್ನು ಸುಲಭ ಮತ್ತು ನಯಗೊಳಿಸಲಿದೆ. ತೆಂಗಿನ ಸಂಪ್ರದಾಯವಲ್ಲದ ಉತ್ಪನ್ನಗಳ ಅಭಿವೃದ್ಧಿಗೆ ಕೇಂದ್ರೀಕೃತ ಗಮನಹರಿಸಬಹುದು. ಇದರಿಂದ ತೆಂಗಿನ ಉದ್ಯಮದ ತೀವ್ರಗತಿಯ ಬೆಳವಣಿಗೆ ಮತ್ತು ಅಭಿವೃದ್ಧಿಗೆ ಸಹಾಯವಾಗಲಿದೆ ಹಾಗೂ ಸಾರ್ವಜನಿಕರಿಗೆ ಪೌಷ್ಠಿಕವಾದ, ಆರೋಗ್ಯದಾಯಕ ಮತ್ತು ತಾಜಾತನ ತರುವ ಪಾನೀಯವು ದೊರಕಲಿದೆ. ಇದರಿಂದ ರೈತಸಮುದಾಯದ ಬಹುದಿನಗಳ ಬೇಡಿಕೆ ಈಡೇರಲಿದೆ.

ನೀರಾ ಪಡೆಯಲು ಈ ಕೆಳಕಂಡ ಅಂಶಗಳು ಪ್ರಮುಖವಾಗಿರುತ್ತದೆ:

1) ನೀರಾ ಮತ್ತು ಅದರ ಉತ್ಪನ್ನಗಳ ಉತ್ಪಾದನೆ, ಸಂಸ್ಕರಣೆ ಮತ್ತು ಮಾರುಕಟ್ಟೆಗೆ ಸಂಬಂಧಿಸಿದ ವಹಿವಾಟಿನ ವಿಧಾನವನ್ನು ಸುಲಲಿತಗೊಳಿಸಲು ಸರಳತೆಯನ್ನು ತರಲು ರಾಜ್ಯಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ನೀರಾ ಸಮಿತಿಗಳ ರಚನೆ.
2) ಅಬಕಾರಿ ಇಲಾಖೆ ಮೂಲಕ ನೀರಾವನ್ನು ನಿಯಂತ್ರಿಸುವುದು.
3) ನೀರಾ ಅಭಿವೃದ್ಧಿಗೆ ಸಂಬಂಧಿಸಿದ ವಿಷಯಗಳಿಗೆ ನಿಯಂತ್ರಕ ವಾತಾವರಣವನ್ನು ಕಲ್ಪಿಸಲು ಅಬಕಾರಿ ಕಾಯ್ದೆ, 1965ಕ್ಕೆ ಕ್ರಮಬದ್ಧ ತಿದ್ದುಪಡಿ.
4) ತೆಂಗು ಬೆಳೆಗಾರರ ಕಂಪನಿಗಳು ಮತ್ತು ರೈತ ಉತ್ಪಾದಕ ಸಂಸ್ಥೆಗಳು ನೀರಾ ಉತ್ಪಾದನೆ, ಸಂಸ್ಕರಣೆ, ಮಾರಾಟ ಮತ್ತು ಮೌಲ್ಯವರ್ಧನೆಯನ್ನು ಕೈಗೊಳ್ಳಲು ಪ್ರಾಥಮಿಕ ಕಾರ್ಯಕರ್ತರಾಗಿ ಕಾರ್ಯನಿರ್ವಹಿಸಲು ಅನುಮತಿ.
5) ನೀರಾ ತಜ್ಞರಿಗೆ ತರಬೇತಿ.
6) ತೋಟಗಾರಿಕೆ ಇಲಾಖೆಗೆ ಈ ಬಗ್ಗೆ ಅನುಷ್ಠಾನ ಇಲಾಖೆಯಾಗಿ ಕಾರ್ಯನಿರ್ವಹಿಸಲು ಅಧಿಕಾರ.
7) ಅಬಕಾರಿ ಇಲಾಖೆಗೆ ನಿಯಂತ್ರಣಾ ಪ್ರಾಧಿಕಾರವಾಗಿ ಕಾರ್ಯನಿರ್ವಹಿಸಲು ಅನುಮತಿ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ ಕರ್ನಾಟಕ ರಾಜ್ಯದಲ್ಲಿ ತೆಂಗು ಬೆಳೆಗಾರರ ಹಿತದೃಷ್ಟಿಯಿಂದ ತೆಂಗಿನ ನೀರಾ ನೀತಿ. 2016ನ್ನು ಜಾರಿಗೊಳಿಸಲು ಹಾಗೂ ತೋಟಗಾರಿಕೆ ಇಲಾಖೆಯನ್ನು ನೀರಾ ನೀತಿಯ ಅನುಷ್ಠಾನ ಇಲಾಖೆಯಾಗಿ ಅಧಿಕಾರ ನೀಡಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 362 ತೋಇವಿ 2015, ಬೆಂಗಳೂರು, ದಿನಾಂಕ: 06–10–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ ಕರ್ನಾಟಕ ರಾಜ್ಯದಲ್ಲಿ ತೆಂಗು ಬೆಳೆಗಾರರ ಹಿತದೃಷ್ಟಿಯಿಂದ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ತೆಂಗಿನ ನೀರಾ ನೀತಿ 2016ನ್ನು ಜಾರಿಗೊಳಿಸಲು ಹಾಗೂ ತೋಟಗಾರಿಕೆ ಇಲಾಖೆಯು ನೀರಾ ನೀತಿಯ ಅನುಷ್ಠಾನ ಇಲಾಖೆಯಾಗಿ ಅಧಿಕಾರ ನೀಡಿ ಸರ್ಕಾರವು ಆದೇಶಿಸಿದೆ.

ನೀರಾವನ್ನು ಮಿತಪ್ರಮಾಣದಲ್ಲಿ ಕಟಾವು ಮಾಡಲು ತೆಂಗು ಬೆಳೆಗಾರರ ಫೆಡರೇಷನ್ ಸದಸ್ಯರಿಗೆ ಅನುಮತಿಸಲು ಅಬಕಾರಿ ಕಾಯ್ದೆಗೆ ಸೂಕ್ತ ತಿದ್ದುಪಡಿಯನ್ನು ತರಲು ಆರ್ಥಿಕ ಇಲಾಖೆಗೆ ನಿರ್ದೇಶಿಸಲಾಗಿದೆ. ಮುಂದುವರೆದು, ಅಬಕಾರಿ ನಿಯಮಗಳಿಗೆ ಸಂಬಂಧಿಸಿದಂತೆ ನೀರಾ ನೀತಿಯಲ್ಲಿನ ನಿಯಂತ್ರಣ ಪ್ರಾಧಿಕಾರವನ್ನಾಗಿ ಅಬಕಾರಿ ಇಲಾಖೆಯು ಕಾರ್ಯನಿರ್ವಹಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 01 ಇಡಿಸಿ 2015, ದಿನಾಂಕ: 21–07–2016ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ರಾಮಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ (ತೋ),
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ:ತೋಇ 362 ತೋಇವಿ 2015, ದಿನಾಂಕ : 06-10-2016 ರ ಅನುಬಂಧ**

**ತೆಂಗು ನೀರಾ ನೀತಿ-2016**

### 1. ಪರಿಚಯ:

ತೆಂಗಿನ ಮರದ ಪ್ರತಿಯೊಂದು ಭಾಗವು ಬಳಕೆಯಾಗುವುದರಿಂದ "ಕಲ್ಪವೃಕ್ಷ" ಎಂದು ಪ್ರಸಿದ್ಧಿಯಾಗಿದೆ. ರಾಜ್ಯದ ಕೃಷಿ ಆರ್ಥಿಕತೆಯಲ್ಲಿ ತೆಂಗಿನ ಬೆಳೆಯು ಪ್ರಮುಖ ಪಾತ್ರ ವಹಿಸಿದೆ. ಅಡಿಗೆ ಕೊಬ್ಬರಿ, ಒಣಕೊಬ್ಬರಿ, ಸಿಹಿ ಪದಾರ್ಥಗಳು, ಎಣ್ಣೆ, ಬೇಕರಿ ಉತ್ಪನ್ನಗಳು ಅಲ್ಲದೇ ಸಾಬೂನು, ಕೇಶ ತೈಲ, ಸೌಂದರ್ಯ ವರ್ಧಕಗಳು ಮತ್ತು ಇತರೆ ಉದ್ಯಮಗಳ ಉತ್ಪನ್ನಗಳನ್ನು ತಯಾರಿಸಲು ಬಳಕೆಯಾಗುತ್ತಲಿದೆ. ಜೊತೆಗೆ ದೊಡ್ಡ ಉದ್ಯಮವಾಗಿರುವ ನಾರಿನ ಕೈಗಾರಿಕೆಗೆ ಅಗತ್ಯವಿರುವ ಕಚ್ಚಾವಸ್ತುವನ್ನು ಒದಗಿಸುವ ಮೂಲವಾಗಿರುತ್ತದೆ. ತೆಂಗಿನ ಎಳನೀರು ಹೆಸರುವಾಸಿಯಾದ ಆರೋಗ್ಯಕರ ಪಾನೀಯವಾಗಿದೆ. ಯಾವುದೇ ರಾಸಾಯನಿಕ ಕ್ರಿಯೆಗೆ ಒಳಪಡಿಸದೇ ತಾಜಾ ತೆಂಗಿನ ಕೊಬ್ಬರಿಯಿಂದ ತೆಗೆಯಲ್ಪಡುವ ವರ್ಜಿನ್ ತೆಂಗಿನ ಎಣ್ಣೆಯು ಜೀವ ಸತ್ವಗಳು, ಖನಿಜಾಂಶಗಳು, ಆ್ಯಂಟಿಆಕ್ಸಿಡೆಂಟ್ ಗಳನ್ನು ಹೇರಳವಾಗಿ ಹೊಂದಿದ್ದು, ಹೆಚ್ಚಿನ ಬೇಡಿಕೆಯಲ್ಲಿರುತ್ತದೆ.

ತೆಂಗು ಬೆಳೆಯನ್ನು ಹೆಚ್ಚಿನ ಸಂಖ್ಯೆಯಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರು ಅವಲಂಬಿಸಿದ್ದು, ಶೇ.98 ರಷ್ಟು ಅಂದರೆ 5 ಮಿಲಿಯನ್ ರಷ್ಟು ತೆಂಗು ಬೆಳೆಗಾರರು 2 ಹೆಕ್ಟೇರ್ ಗಿಂತ ಕಡಿಮೆ ಹಿಡುವಳಿಯನ್ನು ಹೊಂದಿರುತ್ತಾರೆ. ಭಾರತದ ಪಶ್ಚಿಮ ಕರಾವಳಿಯಲ್ಲಿ ಮನೆ ಹಿತ್ತಲ ಕೃಷಿಯಲ್ಲಿ ತೆಂಗು

ಅವಿಭಾಜ್ಯ ಅಂಗವಾಗಿದೆ. ದೇಶದ ಕರಾವಳಿ ಪ್ರದೇಶಗಳಲ್ಲಿ ತೆಂಗಿನ ಬೇಸಾಯವು ಕೇಂದ್ರೀಕೃತವಾಗಿದ್ದು, ತೆಂಗು ಬೆಳೆಯಲು ಪೂರಕ ವಾತಾವರಣ ಇರುವ ಒಳನಾಡು ಪ್ರದೇಶಗಳಲ್ಲಿ ಸಹ ಬೆಳೆಯಲಾಗುತ್ತಿದೆ. ತೆಂಗು ಆಹಾರ ಭದ್ರತೆ ಮತ್ತು ಜೀವನೋಪಾಯದ ಜೊತೆಗೆ ಗ್ರಾಮೀಣ ಪ್ರದೇಶದ ದೊಡ್ಡ ಜನಸಂಖ್ಯೆಗೆ ಉದ್ಯೋಗದ ಅವಕಾಶಗಳನ್ನು ಒದಗಿಸುತ್ತದೆ.

ಭಾರತದಲ್ಲಿ ತೆಂಗು ಬೆಳೆಯನ್ನು ಮುಖ್ಯವಾಗಿ ಕೇರಳ, ತಮಿಳುನಾಡು, ಕರ್ನಾಟಕ, ಆಂಧ್ರ ಪ್ರದೇಶ, ಒರಿಸ್ಸಾ, ಪಶ್ಚಿಮ ಬಂಗಾಳ, ಪಾಂಡೀಚೆರಿ, ಮಹರಾಷ್ಟ್ರದ ಕರಾವಳಿ ಪ್ರದೇಶಗಳಲ್ಲಿ, ಲಕ್ಷದ್ವೀಪ, ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ಬೆಳೆಯಲಾಗುತ್ತಿದೆ. ಒಳನಾಡು ಪ್ರದೇಶಗಳಲ್ಲಿ ಸಹ ತೆಂಗು ಬೇಸಾಯ ವಿಸ್ತರಣೆಗೊಂಡಿರುತ್ತದೆ.

**2. ಹಿನ್ನಲೆ:**

1) ತೆಂಗಿನ ಬೆಳೆಯು ಕರ್ನಾಟಕ ರಾಜ್ಯದ ಪ್ರಧಾನ ವಾಣಿಜ್ಯ ತೋಟದ ಬೆಳೆಗಳಲ್ಲಿ ಒಂದಾಗಿದೆ. ತೆಂಗಿನ ಬೆಳೆಯನ್ನು ರಾಜ್ಯದಲ್ಲಿ 4.97 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದ್ದು, ಸರಾಸರಿ ವಾರ್ಷಿಕ ಉತ್ಪಾದನೆಯು 48,483 ಲಕ್ಷ ಕಾಯಿಗಳಿಗಿಂತಲೂ ಮಿಗಿಲಾಗಿದೆ. ಈ ಬೆಳೆಯು ಒಟ್ಟಾರೆ ತೋಟಗಾರಿಕೆ ವಿಸ್ತೀರ್ಣದ 27% ಪ್ರದೇಶವನ್ನು ಆವರಿಸಿದೆ.

2) ನಮ್ಮ ದೇಶದಲ್ಲಿ ಕರ್ನಾಟಕ ರಾಜ್ಯವು ತೆಂಗು ಬೆಳೆಯ ವಿಸ್ತೀರ್ಣದಲ್ಲಿ ಕೇರಳ ರಾಜ್ಯದ ನಂತರ ಎರಡನೇ ಸ್ಥಾನದಲ್ಲಿ ಮತ್ತು ಉತ್ಪಾದನೆಯಲ್ಲಿ ತಮಿಳುನಾಡು ಮತ್ತು ಗುಜರಾತ್ ರಾಜ್ಯದ ನಂತರ ಮೂರನೇ ಸ್ಥಾನದಲ್ಲಿ ಇರುತ್ತದೆ.

3) ತೆಂಗು ಬೆಳೆಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಬೆಳೆಯುತ್ತಿದ್ದು, ಪ್ರಮುಖವಾಗಿ ತುಮಕೂರು, ಹಾಸನ, ರಾಮನಗರ, ಮಂಡ್ಯ, ಚಿಕ್ಕಮಗಳೂರು, ಚಾಮರಾಜನಗರ, ಮೈಸೂರು, ಚಿತ್ರದುರ್ಗ, ದಕ್ಷಿಣ ಕನ್ನಡ, ದಾವಣಗೆರೆ, ಶಿವಮೊಗ್ಗ, ಉತ್ತರ ಕನ್ನಡ, ಉಡುಪಿ, ಕೋಲಾರ, ಧಾರವಾಡ ಮತ್ತು ಗದಗ ಜಿಲ್ಲೆಗಳಲ್ಲಿ ಬೆಳೆಯಲಾಗುತ್ತಿದೆ.

4) ಕರ್ನಾಟಕದಲ್ಲಿ ಉತ್ಪಾದನೆಯ ಸುಮಾರು 40% ಭಾಗವನ್ನು ಅಡಿಗೆ ಮತ್ತು ಸಾಂಪ್ರದಾಯಿಕ ಧಾರ್ಮಿಕ ಉದ್ದೇಶಗಳಿಗೆ, 20% ಅನ್ನು ಎಳನೀರಿಗೆ, 30% ಅನ್ನು ಒಣಕೊಬ್ಬರಿ ಉತ್ಪಾದನೆಗೆ ಮತ್ತು 10% ಅನ್ನು ಕೈಗಾರಿಕಾ ಉದ್ದೇಶಗಳಿಗೆ ಬಳಸಲಾಗುತ್ತಿದೆ.

5) ರಾಜ್ಯದಲ್ಲಿ ಬಹುಪಾಲು ತೆಂಗಿನ ಬೇಸಾಯಗಾರರು ಸಣ್ಣ ಮತ್ತು ಅತಿಸಣ್ಣ ಹಿಡುವಳಿಗಾರರಾಗಿರುವುದರಿಂದ ಈ ಬೆಳೆಯು ಆರ್ಥಿಕವಾಗಿ ಪ್ರಾಮುಖ್ಯತೆಯನ್ನು ಪಡೆದಿದೆ. ತೆಂಗಿನ ಬೆಳೆಗಾರರು ಬೆಲೆಯಲ್ಲಿನ ಏರಿಳಿತ, ರೋಗ ಮತ್ತು ಕೀಟಗಳ ತೀವ್ರತೆ, ಉತ್ಪಾದನಾ ಪರಿಕರಗಳ ಬೆಲೆಯಲ್ಲಿ ಹೆಚ್ಚಳ, ಇತ್ಯಾದಿ ವಿವಿಧ ಕಾರಣಗಳಿಂದಾಗಿ ಸಂಕಷ್ಟ ಸ್ಥಿತಿಯಲ್ಲಿರುತ್ತಾರೆ.

6) ಹೆಚ್ಚಿದ ಉತ್ಪಾದನಾ ವೆಚ್ಚ ಮತ್ತು ಕಡಿಮೆಯಾದ ಉತ್ಪಾದನೆಯಿಂದಾಗಿ ರೈತರ ಆದಾಯವು ಕ್ಷೀಣಗೊಂಡಿರುತ್ತದೆ. ಕಡಿಮೆ ಲಾಭದಿಂದಾಗಿ ತೆಂಗು ಬೆಳೆಗಾರರು ತೆಂಗು ಕೃಷಿಯನ್ನು ನಿರ್ಲಕ್ಷಿಸುತ್ತಿದ್ದಾರೆ. ಇದರಿಂದಾಗಿ ತೆಂಗು ಕೃಷಿಯು ಲಾಭದಾಯಕ ಉದ್ಯಮವಾಗಿ ಕಂಡುಬರುತ್ತಿಲ್ಲ.

7) ಈ ಹಿನ್ನೆಲೆಯಲ್ಲಿ, ತೆಂಗಿನ ಬೇಸಾಯವನ್ನು ಪುನ:ಶ್ಚೇತನಗೊಳಿಸುವ ಅವಶ್ಯಕತೆ ಉಂಟಾಗಿದೆ. ಈ ಹಿಂದಿನ ವೈಭವವನ್ನು ಪುನ:ಸ್ಥಾಪಿಸಬೇಕಾದರೆ ತೆಂಗು ಬೆಳೆ ಆರ್ಥಿಕತೆಯನ್ನು ಕೊಬ್ಬರಿ- ತೆಂಗಿನ ಎಣ್ಣೆಗಳ ಮೇಲಿನ ಅವಲಂಬನೆಯಿಂದ ಮುಕ್ತಗೊಳಿಸುವುದು ಹಾಗೂ ತೆಂಗಿನ ಇತರೆ ಮೌಲ್ಯವರ್ಧಿತ ಉತ್ಪನ್ನಗಳ ಅಭಿವೃದ್ಧಿ ಕುರಿತು ಹೆಚ್ಚಿನ ಪ್ರಚಾರ ಕೈಗೊಳ್ಳುವುದರಿಂದ ತೆಂಗಿನ ಲಾಭದಾಯಕವಾದ ವೈಭವವನ್ನು ಮರಳಿ ಪಡೆಯಲು ಸಮರ್ಥ ಕಾರ್ಯತಂತ್ರ ರೂಪಿಸಬೇಕಾಗಿರುತ್ತದೆ.

8) ತೆಂಗಿನ ಉದ್ಯಮದ ಸುಸ್ಥಿರತೆಯನ್ನು ಮೌಲ್ಯವರ್ಧನೆ, ಉತ್ಪನ್ನಗಳ ವೈವಿಧ್ಯತೆ, ಕ್ಷೇತ್ರಮಟ್ಟದಲ್ಲಿ ಸಂಸ್ಕರಣೆ ಅಭಿವೃದ್ಧಿ ಮತ್ತು ಉಪ ಉತ್ಪನ್ನದ ಬಳಕೆಯ ಹೆಚ್ಚಳದಿಂದ ಸಾಧಿಸಲು ಅವಕಾಶವಿರುತ್ತದೆ. ಈ ದಿಶೆಯಲ್ಲಿ ಮೌಲ್ಯವರ್ಧಿತ ಉತ್ಪನ್ನಗಳಿಗಾಗಿ ನೀರಾ ಒಂದು ಆಶಾದಾಯಕ ಉತ್ಪನ್ನವಾಗಿದ್ದು, ತೆಂಗಿನ ಬೆಳೆಗಾರರಿಗೆ ಆದಾಯ ತರುವ ಪುನಶ್ಚೇತನ ಉದ್ಯಮವಾಗುವ ವಿಫುಲ **ಅವಕಾಶವನ್ನು ಹೊಂದಿದೆ**.

9) ತೆಂಗು ಬೆಳೆಯ ಮೌಲ್ಯವರ್ಧಿತ ಉತ್ಪನ್ನಗಳ ಶ್ರೇಣಿಯಲ್ಲಿ ನೀರಾ ಸಹ ಒಂದು ನೂತನ ಉತ್ಪನ್ನವಾಗಿದೆ. ನೀರಾ ಮತ್ತು ನೀರಾ ಉತ್ಪನ್ನಗಳ ಮೌಲ್ಯವರ್ಧನೆ ಮಾಡುವುದರಿಂದ ದಕ್ಷಿಣ ಭಾರತದ ತೆಂಗು ವಲಯವನ್ನು ಪುನರುಜ್ಜೀವನಗೊಳಿಸುವುದರ ಜೊತೆಗೆ ತೆಂಗು ಬೆಳೆಗಾರರ ಮತ್ತು ತೆಂಗು ವಲಯದ ಉಜ್ವಲ ಭವಿಷ್ಯ ರೂಪಿಸಲು ಸಹಕಾರಿಯಾಗಿದೆ.

**3. ನೀರಾ:**

**1)** ನೀರಾ ಎಂಬುದು ಸಿಹಿಯಾದ ಕಪ್ಪೇಚಿಪ್ಪು ಜೇನು ಬಣ್ಣದ, ಮಧ್ಯಸಾರ ರಹಿತವಾದ ಪೌಷ್ಠಿಕವಾದ ನೈಸರ್ಗಿಕ, ಆರೋಗ್ಯದಾಯಕ ಪಾನೀಯವಾಗಿದ್ದು, ತೆಂಗಿನ ಗಿಡಗಳ ಹೂಗೊಂಚಲುಗಳಿಂದ ಇಳಿಸಲಾಗುತ್ತದೆ. ಇದರಲ್ಲಿ ಖನಿಜಾಂಶಗಳು, ಲವಣಗಳು ಮತ್ತು ಹೆಚ್ಚಿನ ಪ್ರಮಾಣದಲ್ಲಿ ಸಸಾರಜನಕವು ಇರುತ್ತದೆ.

**2)** ನೀರಾದಿಂದ ಬೆಲ್ಲ, ಸಕ್ಕರೆ, ಸಿರಪ್, ಹನಿ, ಚಾಕೋಲೇಟ್, ಕೇಕ್, ಕ್ಯಾಂಡಿ, ಕುಕ್ಕೀಸ್, ವಿನೆಗರ್, ಇತ್ಯಾದಿ ವಿವಿಧ ಮೌಲ್ಯವರ್ಧಿತ ಉತ್ಪನ್ನಗಳನ್ನು ತಯಾರಿಸಬಹುದು.

**3) ನೀರಾದಲ್ಲಿನ ಪೌಷ್ಟಿಕಾಂಶಗಳು :**

| | | |
|---|---|---|
| 1 | ಒಟ್ಟು ಶರ್ಕರಗಳು (g/100 ml)) | 14.40 |
| 2 | ಒಟ್ಟು ಆ್ಯಶ್ (g/100 ml)) | 0.11-0.41 |
| 3 | ರಸಸಾರ (pH) | 6-6.5 |
| 4 | ಸಿಟ್ರಿಕ್ ಆಮ್ಲ (g/100 ml)) | 0.50 |
| 5 | ಕಬ್ಬಿಣ (g/100 ml) | 0.15 |
| 6 | ರಂಜಕ (g/100 ml)) | 7.59 |
| 7 | ಅಸ್ಕಾರ್ಬಿಕ್ ಆಮ್ಲ (mg/100 ml)) | 16-30 |
| 8 | ಒಟ್ಟು ಪ್ರೋಟೀನ್ (g/100 ml)) | 0.23-0.32 |
| 9 | Glycemic Index (GI) | 35 |
| 10 | ಮದ್ಯಸಾರ (ಆಲ್ಕೋಹಾಲ್) ಅಂಶ ಶೇಕಡಾ | ಇಲ್ಲ |

**4) ನೀರಾದ ಉಪಯೋಗಗಳು:**

1) ನೀರಾವು ಜೀರ್ಣಕ್ರಿಯೆಯನ್ನು ಹೆಚ್ಚಿಸುತ್ತದೆ, ಮೂತ್ರವರ್ಧಕ (ಸುಗಮ ಮೂತ್ರ ವಿಸರ್ಜನೆಗೆ ಸಹಕಾರಿ) ಹಾಗೂ ಕಾಮಾಲೆ ರೋಗವನ್ನು ನಿಯಂತ್ರಿಸುತ್ತದೆ.

2) ಕಡಿಮೆ ಗ್ಲೈಸೆಮಿಕ್ ಇಂಡೆಕ್ಸ್ (GI ಕೇವಲ 35) ಹೊಂದಿರುವುದರಿಂದ ಮಧುಮೇಹ ರೋಗಿಗಳ ಸ್ನೇಹಿಯಾಗಿದೆ.

3) ನೀರಾದಲ್ಲಿ ಖನಿಜಗಳು, 17 ಅಮೈನೋ ಆಮ್ಲಗಳು, ವಿಟಮಿನ್ ಸಿ, ನೈಸರ್ಗಿಕ ಸಕ್ಕರೆ, ಪ್ರೋಟೀನ್ ಹೇರಳವಾಗಿವೆ. ಕೊಬ್ಬು ಮತ್ತು ಕೊಲೆಸ್ಟ್ರಾಲ್ ರಹಿತವಾಗಿದೆ. ನೀರಾವನ್ನು ಕಬ್ಬಿಣ ಮತ್ತು ವಿಟಮಿನ್‌ಗಳ ಕೊರತೆ ಪರಿಹರಿಸಲು ಪೂರಕವಾಗಿ ನೀಡಬಹುದು.

4) ಇದರಲ್ಲಿ ಇನೋಸಿಟಾಲ್ ಅಂಶವು ಹೆಚ್ಚಾಗಿ ಇರುವುದರಿಂದ ಕಣ್ಣಿನ ತೊಂದರೆಗಳು, ಎಕ್ಸಿಮಾ (ತೀವ್ರ ತುರಿಕೆ) ಇತ್ಯಾದಿಗಳ ಉಪಚಾರದಲ್ಲಿ ಉಪಯುಕ್ತವಾಗಿದೆ.

5) ನೀರಾವು ಆರೋಗ್ಯಕರವಾದ ತಂಪಾದ ಮತ್ತು ಸಾಮಾನ್ಯ ಆರೋಗ್ಯ ವೃದ್ಧಿಸಲು ಪ್ರಯೋಜನಕಾರಿಯಾಗಿದೆ. ವೈದ್ಯಕೀಯ ಅಧ್ಯಯದಿಂದಾಗಿ ಆಸ್ತಮಾ, ಕ್ಷಯ, ಗಂಟಲು ಉರಿಯೂತ ಮತ್ತು ಪೈಲ್ಸ್ ತೊಂದರೆಗಳಲ್ಲಿ ಬಳಕೆಮಾಡಬಹುದು.

**4. ನೀರಾ ನೀತಿಯ ಉದ್ದೇಶಗಳು:**

a) ನೀರಾ ಮತ್ತು ಅದರ ಉತ್ಪನ್ನಗಳ ಮಾರಾಟದಿಂದ ದೊರೆಯುವ ಹೆಚ್ಚುವರಿ ಆದಾಯದ ಮೂಲಕ ರಾಜ್ಯದ ತೆಂಗಿನ ಬೆಳೆಗಾರರ ಆರ್ಥಿಕ ಸಮೃದ್ಧಿಗೆ ಹೊಸ ಅವಕಾಶಗಳನ್ನು ತೆರೆಯುವುದು.

b) ನಾಗರಿಕರಿಗೆ ನೈಸರ್ಗಿಕವಾದ ಮತ್ತು ಆರೋಗ್ಯದಾಯಕವಾದ ಪಾನೀಯ ದೊರಕಿಸುವುದು.

c) ಎರಿಯೋಫೈಡ್ ನುಸಿ ಬಾಧೆಯನ್ನು ನಿಯಂತ್ರಿಸುವುದು ಮತ್ತು ನಷ್ಟ ಸರಿದೂಗಿಸುವುದು.

d) ನೀರಾದಿಂದ ಉತ್ಪಾದಿಸಲಾಗುವ ಮೌಲ್ಯವರ್ಧಿತ ಉತ್ಪನ್ನಗಳಿಗೆ ರಫ್ತು ಅವಕಾಶ ಕಲ್ಪಿಸುವುದು.

e) ರಾಜ್ಯದ ತೆಂಗು ಬೆಳೆಯುವ ಪ್ರದೇಶಗಳಲ್ಲಿ ಲಾಭದಾಯಕವಾದ ಉದ್ಯೋಗ ಸೃಷ್ಠಿ ಮಾಡುವುದು.

**5. ಆಯವ್ಯಯ ಭಾಷಣದ ಘೋಷಣೆ (2015-16):**

ತೆಂಗು ಮೌಲ್ಯವರ್ಧನೆ ಮತ್ತು ಸಂಸ್ಕರಣೆ ಮುಖಾಂತರ ತೆಂಗು ಉದ್ಯಮವನ್ನು ಲಾಭದಾಯಕವನ್ನಾಗಿ ಮಾಡುವ ಅವಶ್ಯಕತೆ ಇದೆ. ನೀರಾ ಉತ್ಪಾದಿಸುವುದು ಮತ್ತು ನೀರಾದಿಂದ ಪಾಮ್ ಸಕ್ಕರೆ ಮಾಡುವುದು ಹೆಚ್ಚು ಲಾಭದಾಯಿಕವಾಗಿರುತ್ತದೆ. ಕರ್ನಾಟಕ ರಾಜ್ಯದ ಮಾನ್ಯ ಮುಖ್ಯಮಂತ್ರಿಯವರು ತಮ್ಮ 2015-16 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಕೆಳಕಾಣಿಸಿದಂತೆ ಘೋಷಿಸಿರುತ್ತಾರೆ;

> **"ತೆಂಗು ಉತ್ಪಾದಕರ ಸಂಘಗಳ ಸದಸ್ಯರು ಅವರ ತೆಂಗಿನ ಮರಗಳಿಂದ ಕೆಲ ಪ್ರಮಾಣದಲ್ಲಿ ನೀರಾ ಇಳಿಸಲು ಅನುಮತಿ ನೀಡುವುದಕ್ಕಾಗಿ ಅಬಕಾರಿ ಅಧಿನಿಯಮಕ್ಕೆ ತಿದ್ದುಪಡಿ ತರಲಾಗುವುದು. ಇದು ತೆಂಗು ಬೆಳೆಗಾರರ ಆದಾಯವನ್ನು ಗಣನೀಯವಾಗಿ ಹೆಚ್ಚಿಸುವಲ್ಲಿ ಸಹಾಯಕವಾಗುವುದು".**

**6. ನೀರಾ ಮತ್ತು ನೀರಾ ಉತ್ಪನ್ನಗಳ ಉತ್ಪಾದನೆ:**

- ನೋಂದಾಯಿತ ತೆಂಗು ಬೆಳೆಗಾರರ ಕಂಪನಿಗಳು ಮತ್ತು ರೈತ ಉತ್ಪಾದಕ ಸಂಸ್ಥೆಗಳು ನೀರಾ ಮತ್ತು ಅದರ ಉತ್ಪನ್ನಗಳ ಉತ್ಪಾದನೆಯನ್ನು ಮಾಡಲು ಅವಕಾಶ ನೀಡಲಾಗುವುದು.
- ತೆಂಗು ಉತ್ಪಾದಕರ ಸಂಘಗಳು **(FPCs):** ತೆಂಗು ಉತ್ಪಾದಕರ ಸಂಘಗಳು ಸಂಘಗಳ ನಿಯಮದಡಿ ನೊಂದಾಯಿತ ಸಂಘಗಳಾಗಿದ್ದು 40 ರಿಂದ 100 ಸದಸ್ಯ ರೈತರನ್ನು ಹೊಂದಿರುತ್ತದೆ. ಅಂತಹ 15 ರಿಂದ 25 ತೆಂಗು ಉತ್ಪಾದಕರ ಸಂಘಗಳಿಂದ ತೆಂಗು ಉತ್ಪಾದಕರ ಫೆಡರೇಷನ್ ರೂಪುಗೊಳ್ಳುತ್ತದೆ ಮತ್ತು ಅಂತಹ 10 ಫೆಡರೇಷನ್ ಗಳು ಒಂದು ತೆಂಗು ಉತ್ಪಾದಕ ಕಂಪನಿಯಾಗಿ ರೂಪುಗೊಳ್ಳುತ್ತದೆ.

- ರೈತ ಉತ್ಪಾದಕ ಸಂಸ್ಥೆಗಳು **(FPOs):** ರೈತ ಉತ್ಪಾದಕ ಸಂಸ್ಥೆಗಳು ಕಂಪನಿಗಳ ನಿಯಮಾನುಸಾರ ನೋಂದಾಯಿಸಲಾಗುತ್ತದೆ ಮತ್ತು 1,000 ರೈತ ಸದಸ್ಯರಿರುತ್ತಾರೆ. ಪ್ರತಿಯೊಂದು ರೈತ ಉತ್ಪಾದಕ ಸಂಸ್ಥೆಯು ಸುಮಾರು 50 ಆಸಕ್ತ ಗುಂಪುಗಳನ್ನು ಹೊಂದಿದ್ದು, ಒಂದು ರೈತ ಉತ್ಪಾದಕ ಗುಂಪಿನಲ್ಲಿ 20 ರೈತರು ಇರುತ್ತಾರೆ.

- ರಾಜ್ಯದಲ್ಲಿ ನೀರಾ ಇಳಿಸುವುದು ಪ್ರಾರಂಭಿಕ ಹಂತದಲ್ಲಿರುವುದರಿಂದ ನೀರಾ ತೆಗೆಯುವ ಆರಂಭದ ದಿನಗಳಲ್ಲಿ ಹೆಚ್ಚು ಜಾಗರೂಕರಾಗಿರಬೇಕಾಗಿರುತ್ತದೆ. ಮೂರು ಹಂತದ ರಚನೆಯ FPCs ಮತ್ತು ಎರಡು ಹಂತದ ರಚನೆಯ FPOs ಗಳಿಗೆ ನೀರಾ ಇಳಿಸುವ ಮೊದಲ ಆದ್ಯತೆಯನ್ನು ನೀಡಲಾಗುವುದು ಹಾಗೂ ನೀರಾ ಇಳಿಸುವ ಸಂಬಂಧ ಮುಂದಿನ ಆಗುಹೋಗುಗಳಿಗೆ FPCs ಮತ್ತು FPOs ರವರೆ ನೇರ ಹೊಣೆಗಾರರಾಗಿರುತ್ತಾರೆ. ಈ ಸಂಸ್ಥೆಗಳು ಯಾವ ರೈತರಿಗೆ ನೀರಾ ಇಳಿಸಲು ಅವಕಾಶ ನೀಡಬಹುದೆಂದು ನಿರ್ಧರಿಸುತ್ತಾರೆ. ಇಳಿಸಿದ ನೀರಾದ ಗುಣಮಟ್ಟ ಮತ್ತು ಪ್ರಮಾಣವನ್ನು ರೈತ ಸದಸ್ಯರು ಕಾಯ್ದುಕೊಳ್ಳುವಂತೆ ನೋಡಿಕೊಳ್ಳುವುದು FPCs ಅಥವಾ FPOs ರವರ ಜವಾಬ್ದಾರಿಯಾಗಿರುತ್ತದೆ.

- FPCs ಅಥವಾ FPOs ರವರು ಇಳಿಸಿದ ನೀರಾವನ್ನು ಮಾರುಕಟ್ಟೆ ಮಾಡುವ ಮೊದಲು ಸಂಸ್ಕರಣೆಯನ್ನು ಶೀತ ಸರಣಿ (Cold Chain) ಯಲ್ಲಿ ನಿರ್ವಹಣೆ ಮಾಡುವ ಹಿನ್ನಲೆಯಲ್ಲಿ ರೈತ ಸದಸ್ಯರು ಇಳಿಸಿದ ನೀರಾವನ್ನು ಕಡ್ಡಾಯವಾಗಿ FPCs ಅಥವಾ FPOs ಗಳಿಗೆ ಸರಬರಾಜು ಮಾಡಬೇಕಾಗಿರುತ್ತದೆ.

- ನೀರಾ ಮತ್ತು ನೀರಾ ಉತ್ಪನ್ನಗಳನ್ನು ಮಾರಾಟ ಮಾಡಲು ಸಾಧ್ಯವಿಲ್ಲದ ಸಂದರ್ಭದಲ್ಲಿ FPO ಅಥವಾ FPC ರವರು ಕನಿಷ್ಠ 3 ತಿಂಗಳವರೆಗೆ ರೈತರಿಗೆ ಹಣ ಒದಗಿಸಲು ಅಗತ್ಯವಿರುವ ಬಂಡವಾಳ ಹೊಂದಿರಬೇಕು.

- ನೀರಾ ನೀತಿಯನ್ನು ಒಂದು ಪ್ರಾಯೋಗಿಕ ನೀತಿಯನ್ನಾಗಿ ಜಾರಿಗೊಳಿಸಿ ಈ ಪ್ರಾಯೋಗಿಕ ನೀತಿಯನ್ನು ಯಾವುದೇ ಒಂದು FPCs ಅಥವಾ FPOs ಗಳಿಗೆ ಸೀಮಿತಗೊಳಿಸದೆ ರಾಜ್ಯದಲ್ಲಿರುವ ಎಲ್ಲಾ FPCs ಅಥವಾ FPOs ಗಳನ್ನು ಒಳಗೊಂಡಿರಬೇಕು. ಈ FPCs ಅಥವಾ FPOs ರವರು ತೆಂಗು ಅಭಿವೃದ್ಧಿ ಮಂಡಳಿ ಅಥವಾ ತೋಟಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರವರ ಸಹಕಾರದೊಂದಿಗೆ ಕಂಪನಿಯನುಸಾರ ನೋಂದಾಯಿತರಾಗಿರಬೇಕು.

- ಕರ್ನಾಟಕದಲ್ಲಿ ತೆಂಗು ಅಭಿವೃದ್ಧಿ ಮಂಡಳಿ ಆಶ್ರಯದಲ್ಲಿ ರಚನೆಯಾಗಿರುವ ಒಟ್ಟು 114 ತೆಂಗು ಒಕ್ಕೂಟಗಳಲ್ಲಿ 67 ಒಕ್ಕೂಟಗಳು ಮಾತ್ರ ಯಾವುದಾದರು ಒಂದು FPCs ಯಲ್ಲಿ ನೋಂದಣೆಯಾಗಿರುತ್ತವೆ. ಉಳಿದ 47 ಒಕ್ಕೂಟಗಳು ಇನ್ನು ನೋಂದಣೆಯಾಗಬೇಕಾಗಿದ್ದು ಈ ಒಕ್ಕೂಟಗಳು FPCs ಅಡಿ ಯಲ್ಲಿ ನೋಂದಣೆಯಾಗದ ಹೊರತು ನೀರಾವನ್ನು ಇಳಿಸಲು ಅರ್ಹತೆಯನ್ನು ಹೊಂದಿರುವುದಿಲ್ಲ.

- ನೀರಾವನ್ನು ಇಳಿಸಲು ಹೊಂದಿರುವ ಪರವಾನಗಿಯ ಷರತ್ತುಗಳನ್ನು ಪಾಲಿಸದೇ ದುರುಪಯೋಗ ಪಡಿಸಿಕೊಂಡಲ್ಲಿ, ಅದರ ಪರಿಣಾಮವನ್ನು ಅಧ್ಯಕ್ಷರು ಮತ್ತು ನಂತರ ನೀರಾ ಇಳಿಸಿದ ರೈತ ಸದಸ್ಯರೇ ಎದುರಿಸಬೇಕಾಗಿರುತ್ತದೆ.

- ಉಲ್ಲಂಘನೆ ಮಾಡಿದ ಮೊದಲ 5 ಸಂದರ್ಭಗಳಲ್ಲಿ ಹೆಚ್ಚಿದ ದರದಲ್ಲಿ ದಂಡವನ್ನು ವಿಧಿಸಬಹುದಾಗಿರುತ್ತದೆ ಹಾಗೂ ತದನಂತರವು ಸಹ ಉಲ್ಲಂಘನೆ ಮಾಡಿದಲ್ಲಿ ಅಬಕಾರಿ ಕಾಯಿದೆಯ ಕಾನೂನಿನಡಿ ಕ್ರಮ ಕೈಗೊಳ್ಳುವುದು. ಏಕೆಂದರೆ ಇದು ತುಂಬಾ ಮುಖ್ಯವಾಗಿದ್ದು, ಯೋಜನೆಯ ಆರಂಭದಲ್ಲಿ ಉದ್ದೇಶಪೂರ್ವಕವಲ್ಲದ ಕೆಲವು ತಪ್ಪುಗಳು ಸಂಭವಿಸಬಹುದು.

**7. ನೀರಾ ತಂತ್ರಜ್ಞರ ತರಬೇತಿ:**

ನೀರಾ ಇಳಿಸುವುದು ಒಂದು ಕುಶಲ ಕೆಲಸ. ನೀರಾ ಉತ್ಪಾದನೆಗಾಗಿ ತೆಂಗಿನ ಮರ ಹತ್ತಲು, ಪುಷ್ಪಗುಚ್ಛವನ್ನು ಸರಿಯಾದ ಹದದಲ್ಲಿ ಬಡಿಯಲು, ಕತ್ತರಿಸಿ, ಸೋಂಕು ನಿವಾರಕವನ್ನು ಲೇಪಿಸಲು, ಶುಚಿಯಾದ ರೀತಿಯಲ್ಲಿ ಪುಷ್ಪಗುಚ್ಛವನ್ನು ಸುತ್ತಲು ತಾಂತ್ರಿಕವಾಗಿ ನುರಿತ ವ್ಯಕ್ತಿಯ ಅಗತ್ಯತೆ ಇರುತ್ತದೆ. ನೀರಾ ಮತ್ತು ನೀರಾ ಉತ್ಪನ್ನಗಳ ಉದ್ಯಮವನ್ನು ಸಧೃಡಗೊಳಿಸಲು ತುರ್ತಾಗಿ ನೀರಾ ತಂತ್ರಜ್ಞರ ಕಾರ್ಯಪಡೆ ರಚಿಸುವ ಅವಶ್ಯಕತೆ ಇದೆ. ಈ ತರಬೇತಿ ಕಾರ್ಯಕ್ರಮವನ್ನು ತೋಟಗಾರಿಕೆ ಇಲಾಖೆಯು ತೆಂಗು ಅಭಿವೃದ್ಧಿ ಮಂಡಳಿ ಮೇಲ್ವಿಚಾರಣೆಯೊಂದಿಗೆ ತೆಂಗು ಉತ್ಪಾದಕರ ಕಂಪನಿ ಅಥವಾ ತೋಟಗಾರಿಕಾ ರೈತ ಉತ್ಪಾದಕರ ಸಂಸ್ಥೆ ಮುಖಾಂತರ ಕೈಗೊಳ್ಳಲು ತೆಂಗು ಅಭಿವೃದ್ಧಿ ಮಂಡಳಿ, National Rural Livelyhood Mission (NRLM) ಅಥವಾ ಇತರೆ ಮೂಲಗಳಿಂದ ಆರ್ಥಿಕ ಸಹಾಯವನ್ನು ಪಡೆಯುವುದು.

ನುರಿತ ನೀರ ತಂತ್ರಜ್ಞರ ಗುಂಪನ್ನು ಅಭಿವೃದ್ಧಿಪಡಿಸಲು ತೆಂಗು ಅಭಿವೃದ್ಧಿ ಮಂಡಳಿಯು ಈಗಾಗಲೇ ಪ್ರಾರಂಭಿಕ ಕ್ರಮ ಕೈಗೊಳ್ಳುತ್ತಿದೆ. ಇದನ್ನು 2 ಹಂತಗಳಲ್ಲಿ ಕೈಗೊಳ್ಳಲಾಗುತ್ತಿದ್ದು, ಇದು ಈ ಕೆಳಕಂಡಂತಿದೆ.

**ಅ) ಮಾಸ್ಟರ್ ತಂತ್ರಜ್ಞರ ತರಬೇತಿ**: ಇದನ್ನು ಮೊದಲ ಹಂತದಲ್ಲಿ ನೀಡಲಾಗುತ್ತಿದ್ದು, ಸಾಂಪ್ರದಾಯಿಕ ನೀರಾ ಇಳಿಸುವವರಿಗೆ ವೈಜ್ಞಾನಿಕವಾಗಿ ತರಬೇತಿಯನ್ನು ನೀಡಿ ಮಾಸ್ಟರ್ ತರಬೇತಿದಾರರನ್ನಾಗಿ ರೂಪಿಸುವುದು. ಈ ತರಬೇತಿಯನ್ನು ತೆಂಗು ಅಭಿವೃದ್ಧಿ ಮಂಡಳಿಯ ತಂತ್ರಜ್ಞಾನ ಸಂಸ್ಥೆಯಲ್ಲಿ (CIT) ನೀಡುವುದು. ಈ ತರಬೇತಿ 2 ವಾರಗಳ ಅವಧಿಯಾಗಿರುತ್ತದೆ.

**ಆ) ಹೊಸ ತಂತ್ರಜ್ಞರಿಗೆ ತರಬೇತಿ**: ಮಾಸ್ಟರ್ ತರಬೇತಿದಾರರು ತೆಂಗು ಉತ್ಪಾದಕರ ಕಂಪನಿ ಅಥವಾ ತೋಟಗಾರಿಕಾ ರೈತ ಉತ್ಪಾದಕರ ಸಂಸ್ಥೆಯ ಆಸಕ್ತಿ ಇರುವ ಮತ್ತು ಅರ್ಹ ಅಭ್ಯರ್ಥಿಗಳಿಗೆ ಕಂಪನಿ ಅಥವಾ ಫೆಡರೇಶನ್ ಮಟ್ಟದಲ್ಲಿ ನೀರಾ ಇಳಿಸುವ ಬಗ್ಗೆ ತರಬೇತಿ

ನೀಡುವುದು. ಈ ತರಬೇತಿಯನ್ನು 6 ವಾರಗಳ ಕಾಲ ನೀಡುವುದು ನಂತರ 2 ವಾರಗಳಲ್ಲಿ ಕ್ಷೇತ್ರಮಟ್ಟದ ಉದ್ಯೋಗ ತರಬೇತಿಯನ್ನು ನೀಡುವುದು. ಈ ತರಬೇತಿಯನ್ನು ಯಾವುದೇ ಉದ್ಯೋಗದಲ್ಲಿರುವ 18 ರಿಂದ 45 ವರ್ಷ ವಯಸ್ಸಿನ ಯಾವುದೇ ವ್ಯಕ್ತಿಗೆ ನೀಡುವುದು.

ಈ ತರಬೇತಿ ಕಾರ್ಯಕ್ರಮವು ತಾಂತ್ರಿಕ, ನಿರ್ವಹಣಾ ಮತ್ತು ಪ್ರಾಯೋಗಿಕ ಅವಧಿಗಳನ್ನು ಒಳಗೊಂಡಿದೆ. ಈ ತರಬೇತಿಯಿಂದ ವ್ಯಕ್ತಿಯ ಜೀವನ ಮಟ್ಟವನ್ನು ಸುಧಾರಿಸುವ ನಿಜ ಜೀವನ ಕೌಶಲ್ಯ ಒದಗಿಸುತ್ತದೆ. ತರಬೇತಿಯ 7 ಮತ್ತು 8 ನೇ ವಾರಗಳಲ್ಲಿ ತಂತ್ರಜ್ಞನನು ಉದ್ಯೋಗ ತರಬೇತಿ ಪಡೆಯಲಿದ್ದು ಈ ಅವಧಿಯಲ್ಲಿ ವ್ಯಕ್ತಿಗೆ ನೀರಾ ಇಳಿಸುವ ಪ್ರಮಾಣ ಮತ್ತು ಗುಣಮಟ್ಟದ ಆಧಾರದ ಮೇರೆಗೆ ಹಣ ಪಾವತಿಸಲಾಗುವುದು.

**8. ನೀರಾ ಇಳಿಸುವ ಮತ್ತು ಸಂಸ್ಕರಿಸುವ ತಂತ್ರಜ್ಞಾನವನ್ನು ಅಳವಡಿಸುವಿಕೆ:**

ತೆಂಗು ಅಭಿವೃದ್ಧಿ ಮಂಡಳಿಯ ಮಾರ್ಗದರ್ಶನದೊಂದಿಗೆ ತೋಟಗಾರಿಕೆ ಇಲಾಖೆಯು ಅನುಮೋದಿಸಿದ ನೀರಾ ಇಳಿಸುವ, ಸಂಸ್ಕರಣೆ ಮಾಡುವ ಮತ್ತು ಶೇಖರಿಸುವ ತಂತ್ರಜ್ಞಾನವನ್ನು ನೋಂದಣಿಯಾದ ತೆಂಗು ಉತ್ಪಾದಕರ ಕಂಪನಿ ಅಥವಾ ತೋಟಗಾರಿಕೆ ರೈತ ಉತ್ಪಾದಕ ಸಂಸ್ಥೆಗಳು ಕಡ್ಡಾಯವಾಗಿ ಅಳವಡಿಸಿಕೊಳ್ಳಬೇಕು. CPCs /FPOs ರವರು ನೀರಾದ ನಿಗದಿತ ಗುಣಮಟ್ಟ (ರಸಸಾರ ಮತ್ತು ಮದ್ಯಸಾರ %) ವನ್ನು ಕಾಪಾಡಿಕೊಂಡು, ಅದೇ ಗುಣಮಟ್ಟದ ನೀರಾವನ್ನು ನೇರವಾಗಿ ಸಂಸ್ಕರಣೆ ಮತ್ತು ಸಂಗ್ರಹಣಾ ಘಟಕಕ್ಕೆ ಸಾಗಿಸುವುದು. ಈ ಸಾಗಣಿಕೆಗಾಗಿ ಶೀತಲ ಸರಪಳಿ ವ್ಯವಸ್ಥೆಯನ್ನು ಕಲ್ಪಿಸಲಾಗುವುದು. ಈ ಎಲ್ಲಾ ಉದ್ದೇಶಗಳಿಗಾಗಿ ತೋಟಗಾರಿಕೆ ಇಲಾಖೆಯು ಮಾರ್ಗಸೂಚಿಗಳನ್ನು ನಿಗದಿಪಡಿಸಲಿದೆ ಮತ್ತು ಅವುಗಳನ್ನು CPC /FPO ಗಳು ಕಡ್ಡಾಯವಾಗಿ ಪಾಲಿಸಬೇಕು.

**9. ನೀರಾ ಇಳಿಸಲು ಮತ್ತು ಮಾರಾಟ ಮಾಡಲು ಪರವಾನಿಗೆ ನೀಡುವುದು:**

CPC ಅಥವಾ FPO ಗಳು ನೀರಾ ಇಳಿಸಲು, ಸಂಸ್ಕರಣೆ ಮಾಡಲು ಮತ್ತು ಅದರ ಮೌಲ್ಯವರ್ಧಿತ ಉತ್ಪನ್ನಗಳನ್ನು ಉತ್ಪಾದಿಸಲು ಮತ್ತು ನೀರಾ ಹಾಗೂ ನೀರಾದ ಮೌಲ್ಯವರ್ಧಿತ ಉತ್ಪನ್ನಗಳನ್ನು ಮಾರಾಟ ಮಾಡಲು, ಮಾರಾಟ ಮಳಿಗೆಗಳ ಸಂಖ್ಯೆ ಮತ್ತು ಅವುಗಳ ಸ್ಥಳಗಳನ್ನು ಒಳಗೊಂಡಂತೆ ಪರವಾನಿಗೆಯನ್ನು ತೋಟಗಾರಿಕೆ ಇಲಾಖೆಯ ಸಲಹೆ ಮೇರೆಗೆ ಅಬಕಾರಿ ಇಲಾಖೆಯು ನೀಡಲಿದೆ. ಈ ಪರವಾನಗಿ / ಅನುಮತಿಯೊಂದಿಗೆ, CPCs / FPOs ರವರು ನೀರಾ ಹಾಗೂ ನೀರಾದ ಮೌಲ್ಯವರ್ಧಿತ ಉತ್ಪನ್ನಗಳನ್ನು ನೀರಾ ಮಳಿಗೆಗಳ ಆವರಣದಲ್ಲಿ ಮಾರಾಟ ಮಾಡುತ್ತವೆ. ಜೊತೆಗೆ, ಪರವಾನಗಿಯನ್ನು ಹೊಂದಿದ CPCs ಅಥವಾ FPO ಗಳು ನೀರಾ ಉತ್ಪಾದನಾ ಘಟಕ ಸಂಸ್ಕರಣಾ ಘಟಕಗಳಿಗೆ ಭೇಟಿ ನೀಡಿದ ಪ್ರವಾಸಿಗರಿಗೆ ಉತ್ಪನ್ನಗಳನ್ನು ಮಾರಲು / ಮಾರಾಟ ಮಳಿಗೆ ತೆರೆಯಲು ಅವಕಾಶವಿರುವುದು. CPCs ಅಥವಾ FPOs ರವರು ಕರ್ನಾಟಕದ ಯಾವುದೇ ಭಾಗದಲ್ಲಿ ನೀರಾ ಮಾರಾಟ ಮಳಿಗೆಯನ್ನು ಸ್ಥಾಪಿಸಬಹುದು ಹಾಗೂ ತನ್ನದೇ ನಿರ್ದಿಷ್ಟ ಬ್ರ್ಯಾಂಡ್ ನಲ್ಲಿ ನೀರಾ ಮತ್ತು ನೀರಾ ಉತ್ಪನ್ನಗಳನ್ನು ಮಾರಾಟ /ರಫ್ತು ಮಾಡಬಹುದು.

ಒಂದು CPC ಅಥವಾ FPO ಗೆ ಪ್ರತಿ ಆರ್ಥಿಕ ವರ್ಷದಲ್ಲಿ ಸಾಮಾನ್ಯವಾಗಿ 5000 ತೆಂಗಿನ ಮರಗಳಿಗಿಂತಲು ಹೆಚ್ಚಿನ ಸಂಖ್ಯೆಯ ಮರಗಳಿಗೆ ಪರವಾನಗಿಯನ್ನು ನೀಡಲಾಗುವುದಿಲ್ಲ. ಆದರೆ, ಈ ಸಂಖ್ಯೆ ಬೇಡಿಕೆಗೆ ಅನುಗುಣವಾಗಿ ಬದಲಾಗಬಹುದು. ನೀರಾ ನೀತಿಯ ಪ್ರಕಾರ ನೀರಾ ಇಳಿಸಲು ಆಯ್ಕೆ ಮಾಡುವ ತೆಂಗಿನ ಮರಗಳನ್ನು ಗುರುತಿಸುವ ಹಾಗೂ ನೀರಾ ಇಳಿಸುವ ಸಂಬಂಧ ನಿಯಂತ್ರಿಸುವ ಸಂಪೂರ್ಣ ಅಧಿಕಾರವನ್ನು ಅಬಕಾರಿ ಇಲಾಖೆ ಹೊಂದಿರುತ್ತದೆ.

ನೀರಾ ಸಂಸ್ಕರಣಾ ಘಟಕ ಅಥವಾ ಶೀತಲ ಸರಪಳಿ (cold chain) ವ್ಯವಸ್ಥೆಯನ್ನು ಹೊಂದಿರುವಂತಹ CPCs ಅಥವಾ FPOs ಗಳಿಗೆ ಮಾತ್ರ ನೀರಾ ಇಳಿಸಲು ಪರವಾನಿಗೆಯನ್ನು ನೀಡಲಾಗುವುದು. ಆದಾಗ್ಯೂ ಈ ಘಟಕಗಳನ್ನು ಸ್ಥಾಪಿಸಿದನಂತರ ನೀರಾ ಇಳಿಸಲು ಅವಕಾಶ ನೀಡುವ ಬಗ್ಗೆ ರಾಜ್ಯ ಸರ್ಕಾರ ಬದ್ಧವಾಗಿರುವ ಬಗ್ಗೆ Letter of intent ನೀಡಲಾಗುವುದು. ಈ ಬದ್ಧತೆಯಿಂದಾಗಿ ಮಾರುಕಟ್ಟೆಯಿಂದ ಸಾಲ ಪಡೆಯಲು ಸಹಾಯಕವಾಗುವುದು. ಸಂಸ್ಕರಣಾ ಘಟಕದ ಸಾಮರ್ಥ್ಯವು ಪ್ರತಿ ದಿನ ಎಷ್ಟು ಲೀಟರ್ ನೀರಾ ಇಳಿಸಲು ಅನುಮತಿಸಲಾಗುತ್ತದೆಂಬುದನ್ನು ನಿರ್ಧರಿಸಲಿದೆ.

ನೀರಾ ಮತ್ತು ನೀರಾ ಉತ್ಪನ್ನಗಳನ್ನು ಮಾರಾಟ ಮಾಡಲು ಸಾಧ್ಯವಿಲ್ಲದ ಸಂದರ್ಭದಲ್ಲಿ FPO / FPC ರವರು ರೈತರಿಗೆ ಕನಿಷ್ಠ 3 ತಿಂಗಳವರೆಗೆ ಭರಿಸುವಷ್ಟು ಬಂಡವಾಳ ಹೊಂದಿರಬೇಕು ಎಂಬುದನ್ನು ಖಚಿತಪಡಿಸಿಕೊಳ್ಳಲಾಗುವುದು.

ನೀರಾ ಹಾಗೂ ನೀರಾದ ಮೌಲ್ಯವರ್ಧಿತ ಉತ್ಪನಗಳನ್ನು ಮಾರಾಟ ಮಾಡಲು ಮತ್ತು ಮೌಲ್ಯವರ್ಧನೆ ಮಾಡಲು ಪ್ರತಿ ವರ್ಷಕ್ಕೆ ರೂ.1000 ಗಳ (ರೂ.ಒಂದು ಸಾವಿರ ಮಾತ್ರ ) ಪರವಾನಗಿ ಶುಲ್ಕವಾಗಲಿದೆ.

ಅಬಕಾರಿ ಇಲಾಖೆಯು ನಿರ್ಧರಿಸುವಂತೆ ನೀರಾ ಇಳಿಸಲು ಗುರುತಿಸಲಾದ ಹಾಗೂ ನೀರಾ ಇಳಿಸುವಂತಹ ತೆಂಗಿನ ಮರಗಳಿಗೆ ತೆರಿಗೆಯನ್ನು (Palm tax) ಪಾವತಿಸುವುದು.

ನೀರಾ ಇಳಿಸಲು ಅನುಮತಿ ಪಡೆದ FPO / FPC ಗಳಿಗೆ ಪರವಾನಗಿಯನ್ನು ಮಾರಾಟ ಮಾಡುವುದು ಅಥವಾ ಬೇರೆಯವರಿಗೆ ವರ್ಗಾಯಿಸುವುದು ಅಥವಾ ಗುತ್ತಿಗೆ ಅಥವಾ ಬಾಡಿಗೆಗೆ ಮೇಲೆ ಬೇರೆಯರಿಗೆ ಪರವಾನಗಿಯನ್ನು ನೀಡುವ ಅಧಿಕಾರ ಇರುವುದಿಲ್ಲ.

ನೀರಾ ಉತ್ಪಾದನೆ, ಸಂಸ್ಕರಣೆ ಮತ್ತು ಮಾರಾಟದ ಸಂದರ್ಭದಲ್ಲಿ ನೀರಾ ನೀತಿಯ ನಿಯಮವನ್ನು ಉಲ್ಲಂಘಿಸಿದಲ್ಲಿ ಅಪರಾಧ ಎಂದು ಪರಿಗಣಿಸಲಾಗುತ್ತದೆ ಹಾಗೂ ಅಬಕಾರಿ ಕಾಯ್ದೆ ಪ್ರಕಾರ ಶಿಕ್ಷೆಗೆ ಗುರಿಯಾಗುತ್ತಾರೆ.

**10. ಇತರೆ ಸಂಸ್ಥೆವತಿಯಿಂದ ನೀರಾ ಮತ್ತು ನೀರಾ ಉತ್ಪನ್ನಗಳ ಸಂಸ್ಕರಣಾ ಘಟಕಗಳ ಸ್ಥಾಪನೆ:**

CPCs ಅಥವಾ FPOs ರವರು ವೈಯುಕ್ತಿಕವಾಗಿ ನೀರಾ ಸಂಸ್ಕರಣಾ ಘಟಕವನ್ನು ಸ್ಥಾಪಿಸುವುದು ಅಥವಾ 8 ರಿಂದ 10 CPCs / FPOs ರವರು ನೀರಾ ಸಂಸ್ಕರಣಾ ಘಟಕಗಳನ್ನು Karnataka Co-operative Milk Producers Federation Limited (KMF), Karnataka State Horticulture Federation (KHF), Central Arecanut and Cocoa Marketing and Processing Co-operative Limited (CAMPCO), Big Co-operative Corporate ಗಳ ಸಹಯೋಗದೊಂದಿಗೆ ಸಹ ಸ್ಥಾಪಿಸಬಹುದು.

ರಾಜ್ಯ ಸರ್ಕಾರವು ತೆಂಗು ಅಭಿವೃದ್ಧಿ ಮಂಡಳಿ ಸಹಯೋಗದೊಂದಿಗೆ ರಾಜ್ಯದ ಒಳಗೆ ಮತ್ತು ಹೊರ ರಾಜ್ಯಗಳಲ್ಲಿ ನೀರಾ ಮತ್ತು ನೀರಾ ಉತ್ಪನ್ನಗಳ ಬೇಡಿಕೆ ಬಗ್ಗೆ ಅಧ್ಯಯಿಸುವುದು ಹಾಗೂ ಅದರ ಆಧಾರದ ಮೇಲೆ ಮಾತ್ರ ರಾಜ್ಯದಲ್ಲಿ ನೀರಾ ಉತ್ಪಾದನೆಗೆ ಅನುಮತಿ ನೀಡುವುದು.

**11. ನೀರಾ ಮತ್ತು ನೀರಾ ಉತ್ಪನ್ನಗಳ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಸಹಾಯಧನ:**

ಈ ವಲಯಕ್ಕೆ ಹೆಚ್ಚಿನ ಉದ್ಯಮಿಗಳನ್ನು ಆಕರ್ಷಿಸಲು ತೆಂಗು ಉತ್ಪನ್ನಗಳ ಸಂಸ್ಕರಣಾ ಘಟಕಗಳಿಗೆ ಉತ್ತೇಜಕ ಯೋಜನೆಗಳನ್ನು ಹಮ್ಮಿಕೊಳ್ಳುವುದು ಅತ್ಯವಶ್ಯಕವಾಗಿದೆ.

- ತೆಂಗು ಅಭಿವೃದ್ಧಿ ಮಂಡಳಿವತಿಯಿಂದ- "Technology Mission on Coconut" (TMOC) ಕಾರ್ಯಕ್ರಮದಡಿ ತೆಂಗು ಉತ್ಪನ್ನಗಳನ್ನು ಉತ್ಪಾದಿಸಲು ಉದ್ಯಮಿಗಳಿಗೆ ಒಟ್ಟು ಘಟಕದ ವೆಚ್ಚಕ್ಕೆ ಶೇ.25 ರಂತೆ ಗರಿಷ್ಠ ₹.50.00 ಲಕ್ಷಗಳ ಸಹಾಯಧನ ನೀಡಲಾಗುವುದು ಹಾಗೂ ಉತ್ಪನ್ನಗಳ ಮಾರುಕಟ್ಟೆ ಉತ್ತೇಜನಕ್ಕಾಗಿ ₹.10.00 ಲಕ್ಷಗಳನ್ನು ಪ್ರತಿ ಒಕ್ಕೂಟ /ಕಂಪನಿಗೆ ನೀಡಲಾಗುವುದು. ತೆಂಗು ಅಭಿವೃದ್ಧಿ ಮಂಡಳಿವತಿಯಿಂದ ಸಹಾಯಧನ ಪಡೆದ ಸಂಸ್ಕರಣಾ ಘಟಕಗಳಿಗೆ ರಾಜ್ಯ ಸರ್ಕಾರದಿಂದಲೂ ಸಹ ಶೇ.10 ರಂತೆ ಸಹಾಯಧನ ನೀಡಲಾಗುವುದು.
- ನೀರಾ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲು ಪ್ರತಿ FPO ಗೆ ಶೇ.90 ರಂತೆ ಗರಿಷ್ಠ ₹.1.00 ಕೋಟಿಗಳ ಸಹಾಯಧನವನ್ನು ಇಲಾಖೆಯ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯಡಿ ಒದಗಿಸಲಾಗುವುದು.

**12. ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ನೀರಾ ಸಮಿತಿ ರಚನೆ:**

ರಾಜ್ಯ ಮಟ್ಟದ ನೀರಾ ಸಮಿತಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ (ತೋಟಗಾರಿಕೆ ಇಲಾಖೆ), ಕರ್ನಾಟಕ ಸರ್ಕಾರ ರವರ ಅಧ್ಯಕ್ಷತೆಯಲ್ಲಿ ರಚಿಸುವುದು. ಸಮಿತಿಯ ಸದಸ್ಯರ ವಿವರ ಕೆಳಕಂಡಂತಿದೆ;

| | | |
|---|---|---|
| 1) | ಪ್ರಧಾನ ಕಾರ್ಯದರ್ಶಿ (ತೋಟಗಾರಿಕೆ), ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2) | ಪ್ರಧಾನ ಕಾರ್ಯದರ್ಶಿ (ಆರ್ಥಿಕ ಇಲಾಖೆ), ಕರ್ನಾಟಕ ಸರ್ಕಾರ ಅಥವಾ ಕಾರ್ಯದರ್ಶಿ ಮಟ್ಟದ ಅವರ ಪ್ರತಿನಿಧಿ | ಸದಸ್ಯ |
| 3) | ಪ್ರಧಾನ ಕಾರ್ಯದರ್ಶಿ (ವಾಣಿಜ್ಯ ಮತ್ತು ಕೈಗಾರಿಕೆ), ಕರ್ನಾಟಕ ಸರ್ಕಾರ ಅಥವಾ ಕಾರ್ಯದರ್ಶಿ ಮಟ್ಟದ ಅವರ ಪ್ರತಿನಿಧಿ | ಸದಸ್ಯ |
| 4) | ಅಬಕಾರಿ ಆಯುಕ್ತರು, ಬೆಂಗಳೂರು. | ಸದಸ್ಯ |
| 5) | ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು. | ಸದಸ್ಯ |
| 6) | ನಿರ್ದೇಶಕರು, ತೆಂಗು ಅಭಿವೃದ್ಧಿ ಮಂಡಳಿ ಪ್ರಾದೇಶಿಕ ಕಛೇರಿ, ಬೆಂಗಳೂರು. | ಸದಸ್ಯ |
| 7) | ಪ್ರತಿನಿಧಿ, CFTRI, ಮೈಸೂರು. | ಸದಸ್ಯ |
| 8) | ಪ್ರತಿನಿಧಿ, CPCRI, ಕಾಸರಗೋಡು | ಸದಸ್ಯ |
| 9) | ಪ್ರತಿನಿಧಿ, ಯಾವುದಾದರೂ 2 CPO ಅಥವಾ FPO | ಸದಸ್ಯ |
| 10) | ತೋಟಗಾರಿಕೆ ನಿರ್ದೇಶಕರು | ಸದಸ್ಯ ಕಾರ್ಯದರ್ಶಿ |

**ಈ ಸಮಿತಿಯ ಜವಾಬ್ದಾರಿಗಳು ಕೆಳಕಂಡಂತಿವೆ;**

1) ನೀರಾ ಮತ್ತು ಅದರ ಉತ್ಪನ್ನಗಳ ಉತ್ಪಾದನೆ, ಸಂಸ್ಕರಣೆ ಮತ್ತು ಮಾರುಕಟ್ಟೆಗೆ ಸಂಬಂಧಿಸಿದ ವ್ಯವಹಾರವನ್ನು ಸುಲಲಿತಗೊಳಿಸಲು ಕಾರ್ಯವಿಧಾನಗಳ ಸರಳೀಕರಣ.
2) ನೀರಾ ಮತ್ತು ಅದರ ಮೌಲ್ಯವರ್ಧಿತ ಉತ್ಪನ್ನಗಳ ದೇಶೀಯ ಮತ್ತು ಅಂತರಾಷ್ಟ್ರೀಯ ಮಾರುಕಟ್ಟೆ ಅಭಿವೃದ್ಧಿ.
3) ನೀರಾ ಮತ್ತು ಅದರ ಉತ್ಪನ್ನಗಳ ಉತ್ಪಾದನೆ ಮಾಡಲು ತೆಂಗು ಉತ್ಪಾದಕ ಕಂಪನಿ/ ರೈತ ಉತ್ಪಾದಕ ಸಂಸ್ಥೆಗಳನ್ನು ಪ್ರೋತ್ಸಾಹಿಸಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ತೀರ್ಮಾನಿಸುವುದು.
4) ನೀರಾ ಮತ್ತು ಅದರ ಉಪ ಉತ್ಪನ್ನಗಳ ಸಂಸ್ಕರಣೆಗೆ ಹೊಸ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಲು ಪ್ರೋತ್ಸಾಹಿಸುವುದು.
5) ಅಬಕಾರಿ ಇಲಾಖೆ ಮುಖಾಂತರ ನೀರಾವನ್ನು ನಿಯಂತ್ರಿಸಲು ತೀರ್ಮಾನಗಳನ್ನು ಕೈಗೊಳ್ಳುವುದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



**ಜಿಲ್ಲಾಮಟ್ಟದ ನೀರಾ ಸಮಿತಿ :**

ಈ ಜಿಲ್ಲಾ ಮಟ್ಟದ ಸಮಿತಿ ರಚನೆ ಕೆಳಕಂಡಂತಿದೆ;

| | |
|---|---|
| 1) ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2) ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ | ಸದಸ್ಯ |
| 3) ಉಪ ಆಯುಕ್ತರು, ಅಬಕಾರಿ ಇಲಾಖೆ | ಸದಸ್ಯ |
| 4) ಪ್ರತಿನಿಧಿ, ತೆಂಗು ಅಭಿವೃದ್ಧಿ ಮಂಡಳಿ ಪ್ರಾದೇಶಿಕ ಕಛೇರಿ, ಬೆಂಗಳೂರು. | ಸದಸ್ಯ |
| 5) ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ. | ಸದಸ್ಯ |
| 6) ಪ್ರತಿನಿಧಿ, ಟ್ಯಾಪರ್ಸ್ ಅಸೋಸಿಯೇಷನ್/ CPCS/ FPOs | ಸದಸ್ಯ |
| 7) ತೋಟಗಾರಿಕೆ ಉಪ ನಿರ್ದೇಶಕರು (ಜಿಪಂ) | ಸದಸ್ಯ ಕಾರ್ಯದರ್ಶಿ |

**ಜಿಲ್ಲಾ ಮಟ್ಟದ ನೀರಾ ಸಮಿತಿಯ ಜವಾಬ್ದಾರಿಗಳು ಕೆಳಕಂಡಂತಿವೆ**

1. ಲೈಸನ್ಸ್ ನ್ನು ಪರಿಶೀಲಿಸುವುದು, ನೀರಾ ಮತ್ತು ಅದರ ಉತ್ಪನ್ನಗಳ ಗುಣಮಟ್ಟದ ಉತ್ಪಾದನೆ, ಸಂಸ್ಕರಣೆ ಮತ್ತು ಮಾರುಕಟ್ಟೆಯನ್ನು ಪರಿಶೀಲಿಸುವುದು.
2. ನೀರಾ ಮತ್ತು ನೀರಾ ಉತ್ಪನ್ನಗಳನ್ನು ಜನಪ್ರಿಯಗೊಳಿಸುವ ಬಗ್ಗೆ ಕ್ರಮ ತೆಗೆದುಕೊಳ್ಳುವುದು.
3. ನೀರಾ ಉತ್ಪಾಕರು ಮತ್ತು ಸಂಸ್ಕರಣಾದಾರರ ನಡುವಿನ ಸಮಸ್ಯೆಗಳನ್ನು ಪರಿಹರಿಸುವುದು.
4. ನೀರಾ ಜನಪ್ರಿಯಗೊಳಿಸುವ ಸಂಬಂಧ ನೀರಾ ಪಾಲಿಸಿಯಲ್ಲಿ ಯಾವುದಾದರೂ ಬದಲಾವಣೆ ಅವಶ್ಯವಿದ್ದಲ್ಲಿ ರಾಜ್ಯ ನೀರಾ ಸಮಿತಿಗೆ ಶಿಫಾರಸ್ಸು ಮಾಡುವುದು.
5. ಜಿಲ್ಲಾ ಮಟ್ಟದಲ್ಲಿ ವಿವಿಧ ಸಂಸ್ಥೆಗಳು ಮತ್ತು ಇಲಾಖೆಗಳ ಸಹಯೋಗದೊಂದಿಗೆ ಸುಲಲಿತವಾಗಿ ನೀರಾ ಉತ್ಪಾದನೆ, ಸಂಸ್ಕರಣೆ ಮತ್ತು ಮಾರುಕಟ್ಟೆ ಮಾಡಲು ಕ್ರಮ ಕೈಗೊಳ್ಳುವುದು.

ಈ ಸಮಿತಿಗಳು ಕನಿಷ್ಟ ಪಕ್ಷ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ನೀರಾ ಉತ್ಪಾದನೆ ಮತ್ತು ಮಾರಾಟದ ವಿವರಗಳನ್ನು ಪರಿಶೀಲಿಸುವುದು.

**13. ನೀರಾ ನೀತಿಯ ಫಲಶೃತಿ:**

**ನೀರಾ ಉತ್ಪಾದಕರ ಹಿತದೃಷ್ಠಿಯಿಂದ,** ಒಂದು ತೆಂಗಿನ ಮರದಿಂದ ಶೇ.25 ರಷ್ಟು ಪುಷ್ಪಗುಚ್ಚಗಳಿಂದ ನೀರಾ ಇಳಿಸಿದ್ದಲ್ಲಿ, ಪ್ರತಿ ಮರದಿಂದ ಪಡೆಯಲಾಗುವ ಕಾಯಿಯ ಇಳುವರಿಯಲ್ಲಿ ಹೆಚ್ಚಿನ ವ್ಯತ್ಯಾಸ ಇಲ್ಲದಂತೆ ಪ್ರತಿ ತಿಂಗಳಿಗೆ ಹೆಚ್ಚುವರಿಯಾಗಿ ₹.1000 ದಿಂದ 2000/- ವರೆಗೆ ರೈತರು ಆದಾಯ ಪಡೆಯಬಹುದು.

- ನೀರಾ ಇಳಿಸುವವರು ಸಹಾ ಪ್ರತಿ ತಿಂಗಳಿಗೆ ₹.15,000/- ದಂತೆ ಆದಾಯ ಪಡೆಯಬಹುದು.
- ರಾಜ್ಯದಲ್ಲಿರುವ 4.97 ಲಕ್ಷ ಹೆಕ್ಟೇರ್ ತೆಂಗು ಪ್ರದೇಶದಿಂದ ಶೇ.1 ರಷ್ಟು ಮಾತ್ರ ನೀರಾ ಇಳಿಸಿದ್ದಲ್ಲಿ ಈ ಉದ್ಯಮದಿಂದ ₹.4500 ಕೋಟಿ ಆದಾಯವನ್ನು ನಿರೀಕ್ಷಿಸಬಹುದು.
- **ಗ್ರಾಹಕರ ಹಿತದೃಷ್ಠಿಯಿಂದ,** ನೀರಾ, ಪಾಮ್ ಸಿರಪ್, ಬೆಲ್ಲ ಮತ್ತು ಸಕ್ಕರೆಯಲ್ಲಿ Glycemic Index ಕಡಿಮೆ ಇದ್ದು, ಖನಿಜಗಳು ಹೇರಳವಾಗಿದ್ದು ಹಾಗೂ ಕೊಬ್ಬು ಮುಕ್ತವಾಗಿರುವುದರಿಂದ (ಮಧುಮೇಹ ಸ್ನೇಹಿ) ಸಿಹಿ ಪದಾರ್ಥಗಳ ತಯಾರಿಕೆಯಲ್ಲಿ ಉಪಯೋಗಿಸಬಹುದು.
- **ಮಾರಾಟದ ಹಿತದೃಷ್ಠಿಯಿಂದ,** ತೆಂಗಿನಿಂದ ತಯಾರಿಸುವ ಹೆಚ್ಚು ಉಪಯುಕ್ತ ಮತ್ತು ಆರೋಗ್ಯಕರ ಉತ್ಪನ್ನಗಳ ವೈವಿಧ್ಯೀಕರಣದಿಂದಾಗಿ ಕೊಬ್ಬರಿ ಮತ್ತು ಕೊಬ್ಬರಿ ಎಣ್ಣೆ ಉತ್ಪನ್ನಗಳ ಬೇಡಿಕೆ ಸ್ಥಿರೀಕರಣಗೊಂಡು ರೈತರು ಬೆಲೆ ಕುಸಿತಕ್ಕೆ ಈಡಾಗುವುದಿಲ್ಲ.
- **ಸಾಮಾಜಿಕ ಹಿತದೃಷ್ಠಿಯಿಂದ,** ನೀರಾ ಉತ್ಪಾದನೆ, ಪಾಮ್ ಸಿರಪ್, ಬೆಲ್ಲ ಮತ್ತು ಸಕ್ಕರೆಗಳ ಉತ್ಪಾದನೆಯಿಂದ ಗ್ರಾಮೀಣ ಪ್ರದೇಶದಲ್ಲಿ ಆದಾಯ ಹೆಚ್ಚಿಸುವುದರ ಜೊತೆಗೆ ಉದ್ಯೋಗವಕಾಶವನ್ನು ಸೃಷ್ಟಿಸಿದಂತಾಗುತ್ತದೆ.
- ನೀರಾ ಉತ್ಪಾದನೆಯಿಂದ ತೆಂಗು ಉದ್ಯಮದ ಆದಾಯ ಸ್ಥಿರೀಕರಣಗೊಂಡು ಈ ವಲಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬಂಡವಾಳ ಹೂಡಿಕೆದಾರರು ಭಾಗವಹಿಸುವುದರಿಂದ ಒಟ್ಟಾರೆ ಸಮಾಜದ ಸುಸ್ಥಿರ ಬೆಳವಣಿಗೆಗೆ ಕಾರಣವಾಗುತ್ತವೆ.

**P.R. 657**
**SC-50**

**ಆರ್.ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ತೋ)
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.